CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಫೆಬ್ರವರಿ ೧೯, ೨೦೦೪ (ಮಾಘ ೩೦, ಶಕ ವರ್ಷ ೧೯೨೫) | ಸಂಚಿಕೆ ೮ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ-1**

**ಸಂಖ್ಯೆ: ಸಿಆಸುಇ 21 ಹೆಚ್‌ಹೆಚ್‌ಎಲ್ 2003, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2003**

2003ನೇ ಸಾಲಿನ ಹುತ್ತರಿ ಹಬ್ಬವನ್ನು ದಿನಾಂಕ: 9.12.2003ರ ಮಂಗಳವಾರದ ಬದಲಾಗಿ ವೈಶಾಖ ಮಾಸದ ರೋಹಿಣಿ ನಕ್ಷತ್ರದಂದು ಅಂದರೆ ದಿನಾಂಕ: 08.12.2003ರ ಸೋಮವಾರದಂದು ಆಚರಿಸುತ್ತಿರುವುದರಿಂದ ಹುತ್ತರಿ ಹಬ್ಬವನ್ನು ಆಚರಿಸಲು ದಿನಾಂಕ: 08.12.2003ರ ಸೋಮವಾರದಂದು **ಕೊಡಗು ಜಿಲ್ಲೆಗೆ ಮಾತ್ರ** ಅನ್ವಯವಾಗುವಂತೆ ಸ್ಥಳೀಯ ಸಾರ್ವತ್ರಿಕ ರಜೆಯನ್ನು ಸರ್ಕಾರವು ಈ ಮೂಲಕ ಘೋಷಿಸಿದೆ.

ಸಂಖ್ಯೆ: ಸಿಆಸುಇ 15 ಹೆಚ್‌ಹೆಚ್‌ಎಲ್ 2002ರ ದಿನಾಂಕ: 27.11.2002ರ ಅಧಿಸೂಚನೆ-1ರ ಅನುಬಂಧದಲ್ಲಿ ತಿಳಿಸಿರುವ ಪರಿಮಿತ ರಜೆಯನ್ನು ದಿನಾಂಕ: 09.12.2003ರ ಬದಲಾಗಿ ದಿನಾಂಕ: 08.12.2003 ರಂದು ಬದಲಾಯಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಾರಾಯಣ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

**ಅಧಿಸೂಚನೆ-2**

**ಸಂಖ್ಯೆ: ಸಿಆಸುಇ 21 ಹೆಚ್‌ಹೆಚ್‌ಎಲ್ 2003, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2003**

ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ: 20-25-26 ಪಿಯುಬಿ-1, ದಿನಾಂಕ: 15.06.1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್ಸ್ ಆಕ್ಟ್ 1881ರ (1881ರ ಕೇಂದ್ರ ಮಸೂದೆ 24) 25ನೇ ಸೆಕ್ಷನ್‌ನಲ್ಲಿರುವ ವಿವರಣೆಯಂತೆ ಸಿಆಸುಇ 15 ಹೆಚ್‌ಹೆಚ್‌ಎಲ್ 2002 ದಿನಾಂಕ: 27.11.2002ರ ಅಧಿಸೂಚನೆಯಲ್ಲಿ ಘೋಷಿಸಿದ್ದ ದಿನಾಂಕ: 09.12.2003ರ (ಮಂಗಳವಾರ) ಹುತ್ತರಿ ಹಬ್ಬವನ್ನು ಆ ದಿನದ ಬದಲಾಗಿ ದಿನಾಂಕ: 08.12.2003 (ಸೋಮವಾರ)ಕ್ಕೆ ಬದಲಾಯಿಸಿ **ಕೊಡಗು ಜಿಲ್ಲೆಯಲ್ಲಿ ಮಾತ್ರ** ಪ್ರಾದೇಶಿಕ (ಸ್ಥಳೀಯ) ರಜಾ ದಿನವನ್ನಾಗಿ ಸರ್ಕಾರ ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಾರಾಯಣ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

ಪಿ.ಆರ್. 74

**ವಿಷಯ:** ಶ್ರೀ ಮಹಮ್ಮದ್ ಸಲಾವುದ್ದೀನ್, ಕೆಎಎಸ್ ಅಧಿಕಾರಿ ಅವರ ವಿರುದ್ದದ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ನೋಟೀಸ್ ಸಂಖ್ಯೆ: ಸಿಆಸುಇ 54 ಎಸ್‌ಇಎನ್ 96, ದಿನಾಂಕ: 18.04.2000.

2) ಶ್ರೀ ಮಹಮ್ಮದ್ ಸಲಾವುದ್ದೀನ್, ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ: 19.06.2000 ಮತ್ತು 08.08.2000.

**ಪ್ರಸ್ತಾವನೆ:**

1994-95ರ ಅವಧಿಯಲ್ಲಿ ಬೀದರ್ ಭೂ ನ್ಯಾಯ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಬೀದರ್ ತಾಲ್ಲೂಕಿನ ಗುಲ್ಲರ ಹವೇಲಿ ಗ್ರಾಮದ ಸರ್ವೆ ನಂ.33 ರಲ್ಲಿನ 8 ಎಕರೆ 33 ಗುಂಟೆ ಜಮೀನಿನ ಅಧಿಭೋಗಗಾರಿಕೆ ಹಕ್ಕನ್ನು ಪ್ರಧಾನ ಮಾಡುವಲ್ಲಿ ನೈಜ ಗೇಣಿದಾರರನ್ನು ಕಡೆಗಣಿಸಿ ಕಾನೂನು ಬಾಹಿರವಾಗಿ ಬೇರೊಬ್ಬರಿಗೆ ಮಂಜೂರು ಮಾಡುವ ಮೂಲಕ ಭೂ ಸುಧಾರಣಾ ಕಾಯ್ದೆಯ ವಿಧಿವಿಧಾನಗಳನ್ನು ಉಲ್ಲಂಘಿಸಿರುವುದರ ಜೊತೆಗೆ ಇನ್ನಿತರ ದುರ್ನಡತೆಯ ಆರೋಪಗಳಿಗಾಗಿ ಶ್ರೀ ಮಹಮ್ಮದ್ ಸಲಾವುದ್ದೀನ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 18.04.2000ದ ನೋಟೀಸ್ ನೀಡಿ ಸಮಜಾಯಿಷಿಯನ್ನು ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಶ್ರೀ ಮಹಮ್ಮದ್ ಸಲಾವುದ್ದೀನ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 19.06.2000 ಮತ್ತು 08.08.2000ರ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿದ್ದಾರೆ. ಆದ್ದರಿಂದ ಆರೋಪಗಳ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ಕಂಡುಕೊಳ್ಳುವುದು ಅತ್ಯಾವಶ್ಯಕವಾಗಿದೆಯೆಂದು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 54 ಎಸ್‌ಇಎನ್ 96, ಬೆಂಗಳೂರು, ದಿನಾಂಕ: 21ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಮಹಮ್ಮದ್ ಸಲಾವುದ್ದೀನ್, ಕೆಎಎಸ್ ಅಧಿಕಾರಿ ಅವರ ವಿರುದ್ಧ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ನ್ಯಾಯಾಧೀಶರು, ರಾಯಚೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರಿಗೆ 5,000-00 ರೂಪಾಯಿಗಳ ಗೌರವಧನ ನೀಡಲಾಗುವುದು ಹಾಗೂ ಸರ್ಕಾರದ ಆದೇಶ ಕ್ರಮಾಂಕ: ಸಿಆಸುಇ 45 ಸೇಇವಿ 2001, ದಿನಾಂಕ: 04.03.2002 ರಲ್ಲಿ ನಿಗದಿಪಡಿಸಿರುವಂತೆ ಅವರು ವಾಹನಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ರಾಯಚೂರು ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಶೀಘ್ರಲಿಪಿಗಾರರ-ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ಜಿಲ್ಲಾಧಿಕಾರಿಗಳು, ರಾಯಚೂರು ಅವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು ಶೀಘ್ರವಾಗಿ ಕೈಗೆತ್ತಿಕೊಂಡು 3 ತಿಂಗಳ ಒಳಗಾಗಿ ಕಡ್ಡಾಯವಾಗಿ ಮುಗಿಸಿ ವರದಿಯನ್ನು ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 75

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಎ. ಮಹದೇವ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರ ವಿರುದ್ದದ ಇಲಾಖಾ ವಿಚಾರಣೆ - ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಕ್ರಮಾಂಕ: ಸಿಆಸುಇ 101 ಎಸ್‌ಇಎನ್ 99, ದಿನಾಂಕ: 29.12.2001.

2) ವಿಚಾರಣಾ ವರದಿ ಕ್ರಮಾಂಕ: ಲೋಕ್:ಎಆರ್‌ಇ-3:ಇಎನ್‌ಕ್ಯೂ-32:01-02, ದಿನಾಂಕ: 28.6.2002.

3) ನೋಟೀಸ್ ಕ್ರಮಾಂಕ: ಸಿಆಸುಇ 101 ಎಸ್‌ಇಎನ್ 99, ದಿನಾಂಕ: 28.7.2003.

4) ಶ್ರೀ ಎ. ಮಹದೇವ್, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರ ಉತ್ತರ ದಿನಾಂಕ: 26.8.2003.

5) ಸರ್ಕಾರಿ ಪತ್ರದ ಕ್ರಮಾಂಕ: ಸಿಆಸುಇ 101 ಎಸ್‌ಇಎನ್ 99, ದಿನಾಂಕ: 22.9.2003.

6) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಅವರ ಪತ್ರದ ಕ್ರಮಾಂಕ: ಪಿಎಸ್‌ಸಿ 96 ಸಿಎನ್‌ಎಸ್ 2003, ದಿನಾಂಕ: 10.12.2003.

**ಪ್ರಸ್ತಾವನೆ:**

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ವಿಶೇಷ ಭೂ ಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಪ್ರಾಧಿಕಾರಕ್ಕಾಗಿ ಜಮೀನು ಸ್ವಾಧೀನಪಡಿಸಿಕೊಳ್ಳುವಲ್ಲಿ ನಗರ ಭೂಮಿತಿ ಕಾಯಿದೆಯನ್ವಯ ಸಕ್ಷಮ ಪ್ರಾಧಿಕಾರಿಯಾದ ಜಿಲ್ಲಾಧಿಕಾರಿ ಮೈಸೂರು ಅವರ ಪೂರ್ವಾನುಮತಿ ಪಡೆಯದೆ ಶ್ರೀರಾಂಪುರ ಪ್ರದೇಶದ ಜಮೀನನ್ನು ಸ್ವಾಧೀನಪಡಿಸಿಕೊಂಡು ಪರಿಹಾರಧನವನ್ನು ಪಾವತಿ ಮಾಡುವ ಮೂಲಕ ಪ್ರಾಧಿಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿದ ಆರೋಪಕ್ಕಾಗಿ ಇತರರೊಡನೆ ಶ್ರೀ ಎ. ಮಹದೇವ್ ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರ ವಿರುದ್ಧವೂ ಸಹ ಮೇಲೆ (1) ರಲ್ಲಿ ಓದಲಾದ ದಿನಾಂಕ: 29.12.2001ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ

ಅಪರ ನಿಬಂಧಕರು, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ: 28.6.2002ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ ಆರೋಪಗಳ ಕುರಿತು ಈ ಕೆಳಕಂಡ ನಿರ್ಣಯ ನೀಡಿದರು.

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ವಿಶೇಷ ಭೂ ಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಮೈಸೂರು ತಾಲ್ಲೂಕು, ಶ್ರೀರಾಂಪುರ ಗ್ರಾಮದ ಸರ್ವೆ ನಂಬರ್ 125ರ 3 ಎಕರೆ 22 ಗುಂಟೆ ಜಮೀನನ್ನು ನಗರ ಭೂ (ಪರಿಮಿತಿ ಮತ್ತು ನಿಯಮ) ಕಾಯಿದೆ 1978 ರನ್ವಯ ಜಿಲ್ಲಾಧಿಕಾರಿ ಮತ್ತು ಸಕ್ಷಮ ಪ್ರಾಧಿಕಾರ ನಗರ ಭೂ ಪರಿಮಿತಿ ಮೈಸೂರು ಇವರ ಪೂರ್ವಾನುಮತಿಯನ್ನು ಪಡೆಯದೇ ನೇರವಾಗಿ ಭೂ ಸ್ವಾಧೀನಪಡಿಸಿಕೊಂಡು ಸದರಿ ಜಮೀನುಗಳ ಪೈಕಿ 1 ಎಕರೆ 29 ಗುಂಟೆ ಜಮೀನಿಗೆ ದಿನಾಂಕ: 7.2.92 ರಲ್ಲಿ ಶ್ರೀ ನಿಂಗಯ್ಯ ಕೆ.ಜಿ. ಕೊಪ್ಪಲು, ಮೈಸೂರು ಇವರಿಗೆ ರೂ.88,875-00 ಗಳ ಪಾವತಿ ಮಾಡಿ ಪ್ರಾಧಿಕಾರಕ್ಕೆ ನಷ್ಟವುಂಟು ಮಾಡಿರುತ್ತಾರೆ. ಜಮೀನಿಗೆ ಸಂಬಂಧಿಸಿದಂತೆ ಮೈಸೂರು ನಗರ ಭೂಮಿತಿ ಸಕ್ಷಮ ಪ್ರಾಧಿಕಾರದಲ್ಲಿ ಅನುಮತಿ ಪಡೆಯದೇ ರೂ.88,875-00 ಗಳ ಪರಿಹಾರಧನ ಪಾವತಿ ಮಾಡಿ ಅಷ್ಟೇ ಮೊತ್ತವನ್ನು ಪ್ರಾಧಿಕಾರಕ್ಕೆ ನಷ್ಟವುಂಟುಮಾಡಿದ್ದಾರೆ. ಹೀಗಾಗಿ ಅವರ ವಿರುದ್ಧ ಮಾಡಲಾದ ಆರೋಪ ಸಾಬೀತಾಗಿರುತ್ತದೆ.

ವಿಚಾರಣಾ ವರದಿಯು ಸರ್ಕಾರದ ಪರಿಶೀಲನೆಯಲ್ಲಿದ್ದಾಗ ಶ್ರೀ ಎ. ಮಹದೇವ, ಕೆಎಎಸ್ ಅಧಿಕಾರಿ ಅವರು ದಿನಾಂಕ: 31.8.2002 ರಂದು ವಯೋನಿವೃತ್ತಿ ಹೊಂದಿದರು. ವಿಚಾರಣಾ ವರದಿಯನ್ನು ಪರಿಶೀಲಿಸಲಾಯಿತು. ಹಾಗೂ ಶ್ರೀ ಎ. ಮಹದೇವ್ ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರಿಗೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 28.7.2003ರ ಎರಡನೇ ನೋಟೀಸ್ ನೀಡಿ ಸಾಬೀತಾದ ಆರೋಪಕ್ಕಾಗಿ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ 250-00 ರೂಪಾಯಿಗಳನ್ನು ಒಂದು ವರ್ಷದ ಅವಧಿಗೆ ಏಕೆ ಕಡಿತಗೊಳಿಸಬಾರದೆಂಬುದಕ್ಕೆ ಸಮಜಾಯಿಷಿ ಕೇಳಲಾಯಿತು. ಶ್ರೀ ಎ. ಮಹದೇವ್ ಅವರು ಮೇಲೆ (4) ರಲ್ಲಿ ಓದಲಾದ ದಿನಾಂಕ: 26.8.2003ರ ಉತ್ತರ ಸಲ್ಲಿಸಿ, ಯಾವುದೇ ರೀತಿಯಲ್ಲಿ ಕಾನೂನಿಗೆ ವಿರುದ್ಧವಾದಂತಹ ಕೆಲಸಗಳನ್ನು ಮಾಡಿರುವುದಿಲ್ಲ. ದಾಖಲೆಯಲ್ಲಿ ಯು.ಎಲ್.ಸಿ. ಗೆ ಸೇರಿದೆ ಎಂಬುದರ ಬಗ್ಗೆ ಮಾಹಿತಿ ಇದ್ದಿರುವುದಿಲ್ಲ. ರಾಜಸ್ವ ನಿರೀಕ್ಷಕರ ವರದಿಯನ್ವಯ ಪ್ರಕರಣದ ಜಮೀನು ಯು.ಎಲ್.ಸಿ. ಗಾಗಲೀ, ಗೇಣಿಗಾಗಲೀ ಅಥವಾ ಇನ್ನಿತರ ಇಲಾಖೆಗಳಿಗೆ ಭೂ ಸ್ವಾಧೀನವಾಗಿರುವುದಿಲ್ಲ. ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟಕ್ಕೆ ತಾವು ಜವಾಬ್ದಾರನಲ್ಲವೆಂದು ತಿಳಿಸಿ, ತಮ್ಮ ಮೇಲೆ ಅಸ್ಪಷ್ಟ ಆರೋಪ ಹೊರಿಸಿ ಇಲಾಖಾ ವಿಚಾರಣ ನಡೆಸಿ ವರದಿ ಸಲ್ಲಿಸಿದ್ದು ಅದನ್ನು ಒಪ್ಪಿಕೊಳ್ಳದೇ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

ಆರೋಪಿ ನಿವೃತ್ತ ಅಧಿಕಾರಿಯ ಉತ್ತರವನ್ನು ವಿಚಾರಣಾ ವರದಿ ಹಾಗೂ ದಾಖಲೆಗಳೊಡನೆ ಪರಿಶೀಲಿಸಲಾಗಿ, ಮೂಲದಾಖಲೆಗಳನ್ನಾಧರಿಸಿಯೇ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿದ್ದಾರೆ. ನಗರ ಭೂ ಪರಿಮಿತಿ ಕಾಯಿದೆಯ ವಿಧಿ ವಿಧಾನಗಳನ್ನು ಸಂಪೂರ್ಣವಾಗಿ ಉಲ್ಲಂಘಿಸಿರುವುದು ಮೂಡಿ ಬಂದಿದೆ. ವಾಸ್ತವವಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಿಲ್ಲದಿದ್ದರೂ ಯು.ಎಲ್.ಸಿ. ಕಾಯಿದೆ 76 ರನ್ವಯ ಜಿಲ್ಲಾಧಿಕಾರಿ ಹಾಗೂ ಸಕ್ಷಮ ಪ್ರಾಧಿಕಾರಿ ನಗರ ಭೂಮಿತಿ ಮೈಸೂರು ಅವರ ಪೂರ್ವಾನುಮತಿ ಪಡೆಯದೇ ನೇರವಾಗಿ ಭೂ ಸ್ವಾಧೀನಪಡಿಸಿಕೊಂಡಿರುವುದು, ನಂತರ ಸದರಿ ಜಮೀನಿಗೆ ಪರಿಹಾರ ಪಾವತಿ ಮಾಡಿರುವುದು ಕಂಡು ಬರುತ್ತದೆ. ವಿಚಾರಣಾ ವರದಿಯಲ್ಲಿನ ಈ ಅಂಶಕ್ಕೆ ತಕ್ಕ ಸಮಾಧಾನವನ್ನಾಗಲೀ, ಪೂರಕ ದಾಖಲೆಗಳನ್ನಾಗಲೀ ಆರೋಪಿಯು ನೀಡುವುದೇ ಇಲ್ಲ. ಆದ್ದರಿಂದ ಶ್ರೀ ಎ. ಮಹದೇವ್ ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರ ಉತ್ತರವನ್ನು ಒಪ್ಪದೇ ಆರೋಪ ಸಾಬೀತಾಗಿದೆ. ಎಂಬ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 101 ಎಸ್‌ಇಎನ್ 99, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಎ. ಮಹದೇವ್, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ 250-00 ರೂಪಾಯಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 76

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

## ಕಾನೂನು ಸಚಿವಾಲಯ

**ವಿಷಯ:** ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು:ಸಹಾಯಕ ಅಭಿಯೋಗ ನಿರ್ದೇಶಕರ ಸ್ಥಾನಪನ್ನ ಅವಧಿಯನ್ನು ಘೋಷಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಡಿಪಿಎನ್:ಸಿಶಾ-1:259:2003-04 ದಿನಾಂಕ 16.12.03

**ಪ್ರಸ್ತಾವನೆ:**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಖಾಲಿ ಇರುವ ಸರ್ಕಾರಿ ಅಭಿಯೋಜಕರು:ಅಭಿಯೋಗ ಉಪ ನಿರ್ದೇಶಕರು, ವೃಂದದ ಹುದ್ದೆಗಳನ್ನು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು:ಸಹಾಯಕ ಅಭಿಯೋಗ

ನಿರ್ದೇಶಕರು ವೃಂದದ ಅಧಿಕಾರಿಗಳಿಗೆ ಬಡ್ತಿ ನೀಡುವ ಬಗ್ಗೆ ಪ್ರಸ್ತಾವನೆ ಸಲ್ಲಿಸಲಾಗಿದೆ. ಬಡ್ತಿ ನೀಡುವ ಮುನ್ನ ಸ್ಥಾನಪನ್ನ ಅವಧಿಯನ್ನು ಘೋಷಿಸಬೇಕಾಗುತ್ತದೆ. ಸ್ಥಾನಪನ್ನ ಅವಧಿ ಘೋಷಿಸುವ ಸಲುವಾಗಿ ಈ ಕೆಳಕಂಡ ಅಧಿಕಾರಿಗಳ ಮೂಲ ಆಯಾ ಸಾಲಿನ ಕಾರ್ಯನಿರ್ವಾಹಣ ವರದಿಗಳನ್ನು ಸಲ್ಲಿಸಿದೆ. ಸದರಿ ಅಧಿಕಾರಿಗಳು ಬಡ್ತಿ ಹೊಂದಿದ ಹುದ್ದೆಯಲ್ಲಿ ಒಂದು ವರ್ಷ ತೃಪ್ತಿಕರವಾಗಿ ಕಾರ್ಯ ನಿರ್ವಹಿಸಿರುವುದು ಕಂಡುಬರುತ್ತದೆ. ಸ್ಥಾನಪನ್ನ ಅವಧಿಯಲ್ಲಿ ಅವರುಗಳು ಯಾವುದೇ ರೀತಿಯ ಅಸಾಧಾರಣ ರಜೆಯನ್ನು ಬಳಸಿಕೊಂಡಿರುವುದಿಲ್ಲ. ಕೆಳಕಂಡ ಅಧಿಕಾರಿಗಳ ಪೈಕಿ ಕ್ರಮ ಸಂಖ್ಯೆ 3,9,11,13,17,22 ಮತ್ತು 23ರ ಅಧಿಕಾರಿಯವರ ಕಾರ್ಯನಿರ್ವಾಹಣಾ ವರದಿಯಲ್ಲಿ ವಿರುದ್ಧ ಷರಾ ದಾಖಲಿಸಿರುವ ಬಗ್ಗೆ ಯಾವುದೇ ದಾಖಲಾತಿಗಳಿಲ್ಲ. ಆದ್ದರಿಂದ ಅವರುಗಳ ಸ್ಥಾನಪನ್ನ ಅವಧಿಯಲ್ಲಿನ ಕಾರ್ಯ ತೃಪ್ತಿಕರವೆಂದು ಪರಿಗಣಿಸ ಬಹುದಾಗಿದೆಯೆಂದು ತಿಳಿಸುತ್ತಾ, ಸದರಿ ಎಲ್ಲಾ 28 ಅಧಿಕಾರಿಗಳ ಸ್ಥಾನಪನ್ನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ(ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977ರ ನಿಯಮ 19(3)ರ ಪ್ರಕಾರ ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರು ಮೇಲೆ ಓದಲಾದ ತಮ್ಮ ಅರೆ ಸರ್ಕಾರಿ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

**ಶ್ರೀಯುತರು:**

| | | | |
|---|---|---|---|
| 1) | ಎಂ.ಆರ್. ವೆಂಕಟರಾಮು, | 15) | ಎಸ್.ವಿ. ವಡವಡಗಿ, |
| 2) | ವಿ.ಆರ್.ಹೊಸೂರ್, | 16) | ಎಸ್.ಕೆ.ಮೂರ್ತಿರಾವ್, |
| 3) | ಪಿ.ಕೆ. ಮಲಪುರೆ, | 17) | ಎಸ್.ಡಿ.ಕೆಮ್ಮನಕೇರಿ, |
| 4) | ಎಸ್.ಎಸ್. ಅರಹುಣಸೆ, | 18) | ವಿ.ಕೆ.ಪಾಟೀಲ್, |
| 5) | ವಿ.ಆರ್. ಉಪಾಧ್ಯಾ, | 19) | ಎಸ್.ಕೆ.ಹುಚ್ಚಾರೆಡ್ಡಿ, |
| 6) | ಎಂ.ಎಂ.ನಲ್ಲತವಾಡ್, | 20) | ಹೆಚ್.ಎಸ್.ಹಿರೇಮಠ, |
| 7) | ಬಾಲ ಕಿಷನ್, | 21) | ಹೆಚ್.ಎಂ.ಜವಳಿ, |
| 8) | ಟಿ.ಎಂ.ಗಾಯಿತ್ರಿ, | 22) | ಎ.ಎಸ್.ಚಾಂದಕವಟೆ, |
| 9) | ಎಸ್.ಬಿ. ಪೂಜಾರಿ, | 23) | ಐ.ಬಿ.ಚೌಧರಿ, |
| 10) | ಕೆ.ಬಿ.ದೇಸಾಯಿ, | 24) | ಎಸ್.ಎನ್.ಭೂಷಣ್ಣವರ್, |
| 11) | ಕೆ.ಕೆ.ಸೀತಾರಾಮ, | 25) | ಬಸವನಗೌಡ, |
| 12) | ಎಂ.ವಿ.ಭಟಪನ್ನೆ, | 26) | ಬಿ.ಎಸ್.ಕೂಕನಗೌಡರ್, |
| 13) | ಎನ್.ಎಸ್.ಮಹಾಲೆ, | 27) | ಎನ್.ಎಂ.ಬೆಳ್ಳಕ್ಕಿ, |
| 14) | ಆರ್.ವಿ.ಶ್ರೀರಾಮರೆಡ್ಡಿ, | 28) | ಡಿ.ಎಂ.ಕಾಮೋಜಿ. |

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಮೇಲ್ಕಂಡ ಅಧಿಕಾರಿಗಳ ಪೈಕಿ ಕ್ರಮ. ಸಂಖ್ಯೆ.3, 9, 11, 13,17, 22 ಮತ್ತು 23ರ ಅಧಿಕಾರಿಗಳ ಸ್ಥಾನಪನ್ನ ಅವಧಿಯಲ್ಲಿನ ಕಾರ್ಯ ನಿರ್ವಾಹಣಾ ವರದಿಗಳಾಗಲೀ, ವಿಶೇಷ ವರದಿಯಾಗಲೀ ಲಭ್ಯವಿಲ್ಲದಿರುವುದರಿಂದ ಹಾಗೂ ಸ್ಥಾನಪನ್ನ ಅವಧಿಯಲ್ಲಿನ ಅವರ ಕಾರ್ಯ ತೃಪ್ತಿಕರವಾಗಿದೆ ಎಂಬ ಬಗ್ಗೆ ಯಾವುದೇ ಖಚಿತ ಮಾಹಿತಿ ಲಭ್ಯವಿಲ್ಲದೇ ಇರುವುದರಿಂದ ಅವರುಗಳನ್ನು ಹೊರತುಪಡಿಸಿ ಉಳಿದ ಅಧಿಕಾರಿಯವರ, ಸ್ಥಾನಪನ್ನ ಅವಧಿ ಘೋಷಿಸುವ ಬಗ್ಗೆ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 258 ಪಿಪಿಇ 2003, ಬೆಂಗಳೂರು, ದಿನಾಂಕ:7ನೇ ಜನವರಿ 2004**

ಕರ್ನಾಟಕ ಸರ್ಕಾರಿ ಸೇವಾ(ಸಾಮಾನ್ಯ ನೇಮಕಾತಿ) ನಿಯಮಾವಳಿ 1997ರ ನಿಯಮ 19(3)(ಸಿ) ಪ್ರಕಾರ ಈ ಕೆಳಕಾಣಿಸಿದ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು: ಸಹಾಯಕ ಅಭಿಯೋಗ ನಿರ್ದೇಶಕರುಗಳು ಅವರವರ ಹೆಸರಿನ ಮುಂದೆ ತೋರಿಸಲಾಗಿರುವ ದಿನಾಂಕದಿಂದ ಸ್ಥಾನಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿದ್ದಾರೆಂದು ಸರ್ಕಾರವು ಘೋಷಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯವರ ಹೆಸರು | ಹಿಸಸಅ:ಸಅನಿ ಹುದ್ದೆಗೆ ವರದಿ ಮಾಡಿಕೊಂಡ ದಿನಾಂಕ | ಸ್ಥಾನಪನ್ನ ಅವಧಿ ಮುಕ್ತಾಯಗೊಂಡ ದಿನಾಂಕ | ಸ್ಥಾನಪನ್ನ ಅವಧಿ ಘೋಷಿಸಿರುವ ದಿನಾಂಕ |
|---|---|---|---|---|
| 1 | 2 | 3 | 4 | 5 |
| | **ಶ್ರೀಯುತರು:ಶ್ರೀಮತಿ** | | | |
| 1 | ಎಂ.ಎಸ್.ವೆಂಕಟರಾಮು | 03.07.1992 | 02.07.1993 | 03.07.1993 |
| 2 | ವಿ.ಆರ್.ಹೊಸೂರ್ | 02.07.1992 | 01.07.1993 | 02.07.1993 |
| 3 | ಎಸ್.ಎಸ್.ಅರಹುಣಸಿ | 24.09.1992 | 23.09.1993 | 24.09.1993 |
| 4 | ವಿ,.ಆರ್.ಉಪಾಧ್ಯೆ | 19.10.1992 | 18.10.1993 | 19.10.1993 |

| 1 | 2 | 3 | 4 | 5 |
|---|---|---|---|---|
| 5 | ಎಂ.ಎಂ.ನಲತ್‌ವಾಡ | 04.01.1993 | 03.01.1994 | 04.01.1994 |
| 6 | ಬಾಲಕಿಷನ್ | 05.01.1993 | 04.01.1994 | 05.01.1994 |
| 7 | ಟಿ.ಎಂ.ಗಾಯತ್ರಿ | 10.12.1992 | 09.12.1993 | 10.12.1993 |
| 8 | ಕೆ.ಬಿ.ದೇಸಾಯಿ | 11.07.1994 | 10.07.1995 | 11.07.1995 |
| 9 | ಎಂ.ವಿ.ಭಟಪನ್ನೆ | 21.06.1994 | 20.06.1995 | 21.06.1995 |
| 10 | ಆರ್.ವಿ.ಶ್ರೀರಾಮರೆಡ್ಡಿ | 05.07.1994 | 04.07.1995 | 05.07.1995 |
| 11 | ಎಸ್.ವಿ.ವಡವಡಗಿ | 22.06.1994 | 21.06.1995 | 22.06.1995 |
| 12 | ಎಸ್.ಕೆ.ಮೂರ್ತಿ ರಾವ್ | 08.06.1994 | 07.06.1995 | 08.06.1995 |
| 13 | ವಿ.ಕೆ.ಪಾಟೀಲ್ | 22.06.1994 | 21.06.1995 | 22.06.1995 |
| 14 | ಎಸ್.ಕೆ.ಹುಚ್ಚಾರೆಡ್ಡಿ | 17.06.1994 | 16.06.1995 | 17.06.1995 |
| 15 | ಹೆಚ್.ಎಸ್.ಹಿರೇಮಠ್ | 04.07.1994 | 03.07.1995 | 04.07.1995 |
| 16 | ಹೆಚ್.ಎಂ.ಜವಳಿ | 27.06.1994 | 26.06.1995 | 27.06.1995 |
| 17 | ಎಸ್.ಎನ್.ಭೂಸಣ್ಣವರ್ | 17.06.1994 | 16.06.1995 | 17.06.1995 |
| 18 | ಬಸವನಗೌಡ | 04.06.1994 | 03.06.1995 | 04.06.1995 |
| 19 | ಬಿ.ಎಸ್.ಕೂಕನಗೌಡರ್ | 24.06.1994 | 23.06.1995 | 24.06.1995 |
| 20 | ಎನ್.ಎಂ.ಬೆಳ್ಳಕ್ಕಿ | 24.06.1994 | 23.06.1995 | 24.06.1995 |
| 21 | ಡಿ.ಎಂ.ಕಾಮೋಜಿ | 11.07.1994 | 10.07.1995 | 11.07.1995 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಹೆಚ್. ನಾಗೇಂದ್ರಪ್ಪ**

ಪಿ.ಆರ್. 78 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ, (ಆಡಳಿತ–2).

**ವಿಷಯ:** ಸರ್ಕಾರಿ ಅಭಿಯೋಜಕರು : ಅಭಿಯೋಗ ಉಪ ನಿರ್ದೇಶಕರ ಸ್ಥಾನಪನ್ನ ಅವಧಿಯನ್ನು ಘೋಷಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಡಿಪಿಎನ್:ಸಿಶಾ1:244:2003-04 ದಿನಾಂಕ: 08.12.2003.

**ಪ್ರಸ್ತಾವನೆ:**

ಈ ಕೆಳಕಂಡ ಅಧಿಕಾರಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 80 ಪಿಪಿಇ 91, ದಿನಾಂಕ: 28.9.1991ರ ಪ್ರಕಾರ ಸರ್ಕಾರಿ ಅಭಿಯೋಜಕರು : ಅಭಿಯೋಗ ಉಪ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ಹೊಂದಿದ್ದು, ಬಡ್ತಿ ಹೊಂದಿದ ಹುದ್ದೆಯಲ್ಲಿ ಒಂದು ವರ್ಷದವರೆಗೆ ಸ್ಥಾನಪನ್ನ ಅವಧಿಯಲ್ಲಿ ಕಾರ್ಯನಿರ್ವಹಿಸಿರುತ್ತಾರೆ. ಈ ಅವಧಿಯಲ್ಲಿ ಅವರು ಯಾವುದೇ ಅಸಾಧಾರಣಾ ರಜೆ ಪಡೆದುಕೊಂಡಿರುವುದಿಲ್ಲ. ಬಡ್ತಿ ಹೊಂದಿದ ಹುದ್ದೆಯಲ್ಲಿ ತೃಪ್ತಿಕರವಾಗಿ ಕಾರ್ಯನಿರ್ವಹಿಸಿರುವುದು ಕಂಡು ಬಂದಿದೆ. 91-92 ಮತ್ತು 92-93ನೇ ಸಾಲಿನ ಕಾರ್ಯನಿರ್ವಹಣಾ ವರದಿಗಳನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆ. ಸದರಿ ಅಧಿಕಾರಿಯವರಿಗೆ ಜಂಟಿ ಅಭಿಯೋಗ ನಿರ್ದೇಶಕರಾಗಿ ಮುಂಬಡ್ತಿ ನೀಡುವ ಮುನ್ನ ಸ್ಥಾನಪನ್ನ ಅವಧಿ ಘೋಷಿಸಬೇಕಾಗಿರುವುದರಿಂದ ಸ್ಥಾನಪನ್ನ ಅವಧಿಯನ್ನು ಘೋಷಿಸುವಂತೆ ಮೇಲೆ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಸರ್ಕಾರವನ್ನು ಕೋರಿರುತ್ತಾರೆ.

1. ಶ್ರೀ ಕೆ.ಆರ್. ಪೂಜಾರ್,
   ಸರ್ಕಾರಿ ಅಭಿಯೋಜಕರು, ಬಿಜಾಪುರ.
2. ಶ್ರೀ ಎಂ.ಟಿ. ಕುಲಕರ್ಣಿ,
   ಅಭಿಯೋಗ ಉಪ ನಿರ್ದೇಶಕರು, ಬೆಳಗಾವಿ ವಿಭಾಗ, ಬೆಳಗಾವಿ.
3. ಶ್ರೀ ಆರ್.ಎಂ. ಪಾಟೀಲ್,
   ಅಪರ ಸರ್ಕಾರಿ ಅಭಿಯೋಜಕರು, ಬೀದರ್.
4. ಶ್ರೀ ಎಸ್.ಟಿ. ಉದಾಪುಡಿ,
   ಅಪರ ಸರ್ಕಾರಿ ಅಭಿಯೋಜಕರು, ಮಂಡ್ಯ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಮೇಲ್ಕಂಡ ಅಧಿಕಾರಿಗಳು ಸ್ಥಾನಪನ್ನ ಅವಧಿಯಲ್ಲಿ ತೃಪ್ತಿಕರವಾಗಿ ಕಾರ್ಯ ನಿರ್ವಹಿಸಿರುವುದರಿಂದ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 256 ಪಿಪಿಇ 2003, ಬೆಂಗಳೂರು, ದಿನಾಂಕ: 8ನೇ ಜನವರಿ 2004**

ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977ರ ನಿಯಮ 19(3) (ಸಿ) ಪ್ರಕಾರ ಈ ಕೆಳಕಂಡ ಸರ್ಕಾರಿ ಅಭಿಯೋಜಕರು : ಅಭಿಯೋಗ ಉಪ ನಿರ್ದೇಶಕರುಗಳ ಹೆಸರಿನ ಮುಂದೆ ತೋರಿಸಲಾದ ದಿನಾಂಕದಿಂದ ಅವರುಗಳ ಸ್ಥಾನಪನ್ನ ಅವಧಿ ತೃಪ್ತಿಕರವಾಗಿದೆಯೆಂದು ಸರ್ಕಾರವು ಘೋಷಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು, ಪದನಾಮ, ಕರ್ತವ್ಯದ ಸ್ಥಳ | ಬಡ್ತಿ ಹೊಂದಿದ ಹುದ್ದೆಯಲ್ಲಿ ವರದಿ ಮಾಡಿಕೊಂಡ ದಿನಾಂಕ | ಸ್ಥಾನಪನ್ನ ಅವಧಿ ಘೋಷಿಸಬೇಕಾದ ದಿನಾಂಕ |
|---|---|---|---|
| 1. | ಶ್ರೀ ಕೆ.ಆರ್. ಪೂಜಾರ್,<br>ಸರ್ಕಾರಿ ಅಭಿಯೋಜಕರು, ಬಿಜಾಪುರ. | 11.10.1991 | 10.10.1992 |
| 2. | ಶ್ರೀ ಎಂ.ಟಿ. ಕುಲಕರ್ಣಿ,<br>ಅಭಿಯೋಗ ಉಪ ನಿರ್ದೇಶಕರು, ಬೆಳಗಾವಿ ವಿಭಾಗ, ಬೆಳಗಾವಿ. | 14.10.1991 | 13.10.1992 |
| 3. | ಶ್ರೀ ಆರ್.ಎಂ. ಪಾಟೀಲ್,<br>ಅಪರ ಸರ್ಕಾರಿ ಅಭಿಯೋಜಕರು, ಬೀದರ್. | 10.10.1991 | 09.10.1992 |
| 4. | ಶ್ರೀ ಎಸ್.ಟಿ. ಉದಾಪುಡಿ,<br>ಅಪರ ಸರ್ಕಾರಿ ಅಭಿಯೋಜಕರು, ಮಂಡ್ಯ. | 24.10.1991 | 23.10.1992 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಹೆಚ್. ನಾಗೇಂದ್ರಪ್ಪ**

ಪಿ.ಆರ್. 77 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಎಂ.ಎಸ್.ಸತೀಶ್, ಉಪ ಸಲಹೆಗಾರರು, ಟೆಕ್ಸಾಕ್, ಬೆಂಗಳೂರು ಇವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳು.

**ಓದಲಾಗಿದೆ:** 1. ಟಿಪ್ಪಣಿ ಸಂಖ್ಯೆ: ಆಸರಾಸ 229 ಟಿ/03, ದಿನಾಂಕ: 19.6.2003.
2. ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 511 ವೆಚ್ಚ-5/95, ದಿನಾಂಕ: 14.2.95.
3. ಪತ್ರ ಸಂಖ್ಯೆ: ಟೆಕ್ಸಾಕ್/ಸಿಎ/2003/746, ದಿನಾಂಕ: 2.7.2003.
4. ಅಧಿಸೂಚನೆ ಸಂಖ್ಯೆ: ಸಿಆಸುಇ 172 ಸಅಸೇ 2003, ದಿನಾಂಕ: 17.7.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ: 2.7.2003ರ ಪತ್ರದಲ್ಲಿ ಶ್ರೀ ಎಂ.ಎಸ್.ಸತೀಶ್, ಉಪ ಸಲಹೆಗಾರರು, ಟೆಕ್ಸಾಕ್, ಬೆಂಗಳೂರು ಇವರನ್ನು ಮಾನ್ಯ ಕೃಷಿ ಉತ್ಪನ್ನ ಸಂಸ್ಕರಣೆ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿಯಾಗಿ ನೇಮಿಸಲು ಅವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆಯ ಇಲಾಖೆಯ ವಶಕ್ಕೆ ನೀಡಿರುವನ್ವಯ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ: 17.7.2003ರ ಅಧಿಸೂಚನೆಯಲ್ಲಿ ಅಧಿಕಾರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಸದರಿ ಸಚಿವರ ಪದಾವಧಿಯವರೆಗೆ ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಯ ನಿಯಮ 15 (1) (ಬಿ) (2) ರನ್ವಯ ಗುತ್ತಿಗೆ ಆಧಾರದ ಮೇಲೆ ಮಾನ್ಯ ಕೃಷಿ ಉತ್ಪನ್ನ ಸಂಸ್ಕರಣೆ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿಯಾಗಿ ನೇಮಿಸಲಾಗಿತ್ತು. ಇವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳನ್ನು ನಿಗದಿಪಡಿಸುವ ಅಗತ್ಯತೆಯನ್ನು ಮನಗಂಡು ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 172 ಸಅಸೇ 2003, ಬೆಂಗಳೂರು, ದಿನಾಂಕ: 21ನೇ ಜನವರಿ 2004**

ಶ್ರೀ ಎಂ.ಎಸ್.ಸತೀಶ್, ಉಪ ಸಲಹೆಗಾರರು, ಟೆಕ್ಸಾಕ್, ಬೆಂಗಳೂರು ಇವರ ಮಾನ್ಯ ಕೃಷಿ ಉತ್ಪನ್ನ ಸಂಸ್ಕರಣೆ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ ಹುದ್ದೆಯಲ್ಲಿನ ಗುತ್ತಿಗೆ ಆಧಾರದ ನೇಮಕಾತಿಯ ನಿಬಂಧನೆ ಹಾಗೂ ಷರತ್ತುಗಳನ್ನು ಈ ಆದೇಶದ ಅನುಬಂಧದಲ್ಲಿ ವಿವರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ.ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ANNEXURE**

Sri M.S.Sateesh is appointed on contract basis on the following terms and conditions:-

**1. PERIOD:** The period of contract of Sri M.S.Sateesh is for a period of one year or until further orders whichever is earlier.

**2. COMMENCEMENT AND END OF CONTRACT:** The appointment on contract shall commence on the date on which the official takes charge of the post of P.S. to Ex-Minister and ends on, the date on which he permanantely hands over the charge of the said post.

**3. PAY & OTHER ALLOWANCES:** During the period of contract, Sri M.S.Sateesh shall be entitled to pay including DA/HRA/CCA admissible to him in his Parent Organisation. He shall not be entitled to any deputation allowance or any Other allowance including Bonus/Ex-gratia hithcrto drawn In Parent Organisation.

**4. LEAVE RULES:** He will be governed by the Leave Rules applicable to him in his Parent Organisation.

**5. LEAVE SALARY CONTRIBUTION:** The Government shall pay Leave Salary contribution at the rate of 11% of his pay.

**6. P.F. CONTRIBUTION:** 12% of Basic Pay plus DA shall be deducted from the salary of the Officer every month and remitted to TECSOK together with employer's contribution at 12% of Basic Pay plus DA (The rate shall be as per the P.F.Act.

**7. GRATUITY FUND CONTRIBUTION:** Government shall pay contribution towards service Gratuity at the rate applicable in the Parent Organisation.

**8. MEDICAL CONCESSION:** The Official shall be entitled to the medical attendance as per the Karnataka Government Servants (Medical Attendance) Rules 1963.

**9.** He shall be entitled to TA/DA at the rate admissible to the Officials of State Government of his status.

**10.** He shall perform the functions of JD (HRD) and attend to all work entrusted to him from time to time by the said Office.

**11.** In respect of matters not specifically covered by this order the decision of Government shall be final.

**12.** He shall perform his duties diligently and he shall maintain strict secrecy in respect of official information which he comes to know in the course of his duties.

**13.** He shall be liable to reimburse to Government all the losses which the Government may sustain due to misconduct of any sort on his Part.

**14.** He shall be repatriated to his parent organization immediately in the event of liquidation or privatization of the Parent Company, if it happens earlier than the period mentioned in condition at sl.no 1 above.

**U.P.PRABHU**
Under Secretary to Government,
DPAR (Services-2).

P.R. 96

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 34 ಎಸ್‌ಇಎಂ 96 ದಿನಾಂಕ: 19.2.1997.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 96 (ಭಾಗ) ದಿನಾಂಕ: 27.3.1998.
3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸಸಿವಿ 98 ದಿನಾಂಕ: 24.4.1998.
4) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 98 ದಿನಾಂಕ: 24.9.1998.
5) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 99 ದಿನಾಂಕ: 3.4.1999.
6) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 4 ಸಸಿವಿ 2000 ದಿನಾಂಕ: 18.2.2000.
7) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 37 ಸಸಿವಿ 2001 ದಿನಾಂಕ: 23.10.2001.
8) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 2002 ದಿನಾಂಕ: 2.5.2002.
9) ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 3 ಯೋಮೇಘ 2002 ದಿನಾಂಕ: 16.12.2003.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿ ಕೆಳಕಂಡ ಸಿಬ್ಬಂದಿಗಳನ್ನು ಒಳಗೊಂಡಂತೆ ಯೋಜನಾ ಮೇಲ್ವಿಚಾರಣಾ ಘಟಕವನ್ನು ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| | | |
|---|---|---|
| 1. | ಅ. ಜಂಟಿ : ಉಪ ಕಾರ್ಯದರ್ಶಿ<br>ಆ. ಶೀಘ್ರಲಿಪಿಗಾರರು<br>ಇ. ಕಿರಿಯ ಸಹಾಯಕರು | 1<br>1<br>1 |
| 2. | ಅಕೌಂಟ್ಸ್ ಆಫೀಸರ್ (ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯಪತ್ರ ಇಲಾಖೆಯಿಂದ ನಿಯೋಜಿಸುವುದು) | 1 (ವೇತನ ಶ್ರೇಣಿ ರಹಿತ ಹುದ್ದೆ) |
| 3. | ಸಂಶೋದನಾಧಿಕಾರಿ : ಸ್ಟ್ಯಾಟಿಸ್ಟಿಕಲ್ ಅನಾಲಿಸ್ಟ್ (ಸಾಂಸ್ಥಿಕ ಹಾಗೂ ಸಾಂಖ್ಯಿಕ ಇಲಾಖೆಯ ಗಣಕ ಯಂತ್ರ ಜ್ಞಾನವನ್ನು ಹೊಂದಿರುವ ಅಧಿಕಾರಿಯನ್ನು ನಿಯೋಜಿಸುವುದು) | 1 (ವೇತನ ಶ್ರೇಣಿ ರಹಿತ ಹುದ್ದೆ) |
| 4. | ಪ್ರೋಗ್ರಾಮರ್ | 1 |
| 5. | ಶೀಘ್ರಲಿಪಿಗಾರರು : ಡಾಟಾ ಎಂಟ್ರಿ ಆಪರೇಟರ್ | 1 |

ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಹುದ್ದೆಗಳನ್ನು ದಿನಾಂಕ: 19.2.1998 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ಕೆಳಕಂಡ ಹೆಚ್ಚುವರಿ ಹುದ್ದೆಗಳನ್ನು ಸೃಜಿಸಲಾಗಿದೆ ಹಾಗೂ ಈ ಹುದ್ದೆಗಳ ಅವಧಿಯು ದಿನಾಂಕ: 19.2.1997ರ ಸರ್ಕಾರಿ ಆದೇಶದಲ್ಲಿ ಸೃಜಿಸಲಾದ ಸಿಬ್ಬಂದಿ ವರ್ಗದ ಅವಧಿಯೊಂದಿಗೆ ಕೊನೆಗೊಳ್ಳಲಿರುವುದಾಗಿ ಆದೇಶಿಸಲಾಗಿದೆ.

| | | |
|---|---|---|
| 1. | ಸಂಶೋದನಾಧಿಕಾರಿ ಮತ್ತು ಪದನಿಮಿತ್ತ ಅಪರ ನಿರ್ದೇಶಕರು : ಸಹ ನಿರ್ದೇಶಕರು : ಉಪ ನಿರ್ದೇಶಕರು, ಯೋಜನಾ ಉಸ್ತುವಾರಿ ಘಟಕ | 2 (ವೇತನ ಶ್ರೇಣಿ ರಹಿತ ಹುದ್ದೆ) |
| 2. | ಶಾಖಾಧಿಕಾರಿ | 1 |
| 3. | ಹಿರಿಯ ಸಹಾಯಕರು | 1 |
| 4. | ಶೀಘ್ರಲಿಪಿಗಾರರು | 1 |
| 5. | ಬೆರಳಚ್ಚುಗಾರರು | 1 |
| 6. | ಟೆಕ್ನೀಷಿಯನ್ (ಗ್ರೂ ^ಡಿ^ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ). | 1 |

ಕ್ರಮ ಸಂಖ್ಯೆ (4) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆ, ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ಒಂದು ವಾಹನ ಚಾಲಕರ ಹುದ್ದೆಯನ್ನು ದಿನಾಂಕ: 19.2.1997ರ ಸರ್ಕಾರಿ ಆದೇಶದಲ್ಲಿ ಸೃಜಿಸಲಾಗಿರುವ ಸಿಬ್ಬಂದಿ ವರ್ಗದ ಅವಧಿಯೊಂದಿಗೆ ಕೊನೆಗೊಳ್ಳುವಂತೆ ಸೃಜಿಸಲಾಗಿದೆ.

ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ದಿನಾಂಕ: 19.2.1999 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ ಹಾಗೂ ಈ ಹುದ್ದೆಗಳ ಅವಧಿಗೆ ಕೊನೆಗೊಳ್ಳುವಂತೆ ಒಂದು ಡಾಟಾ ಎಂಟ್ರಿ ಆಪರೇಟರ್ ಹುದ್ದೆಯನ್ನು ಸೃಜಿಸಲಾಗಿದೆ.

ಕ್ರಮ ಸಂಖ್ಯೆ (7)ರ ಸರ್ಕಾರಿ ಆದೇಶದಲ್ಲಿ ಮೇಲ್ಕಂಡ ಹುದ್ದೆಗಳ ಚಾಲ್ತಿಯ ಅವಧಿಗೆ, ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ; ಹಾಗೂ ^ಸಂಶೋದನಾಧಿಕಾರಿ : ಸ್ಟ್ಯಾಟಿಸ್ಟಿಕಲ್ ಅನಾಲಿಸ್ಟ್^ ಹುದ್ದೆಯನ್ನು ^ಸಹಾಯಕ ನಿರ್ದೇಶಕರು : ಉಪ ನಿರ್ದೇಶಕರು^ ಹುದ್ದೆ ಎಂದು ಪುನರ್ ಪದನಾಮೀಕರಿಸಲಾಗಿದೆ.

| | | |
|---|---|---|
| 1. | ಹಿರಿಯ ಸಹಾಯಕ | 1 |
| 2. | ಸಹಾಯಕ | 1 |
| 3. | ಕಿರಿಯ ಸಹಾಯಕ | 1 |

ನಂತರ ಈ ಎಲ್ಲಾ ಹುದ್ದೆಗಳನ್ನು ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ದಿನಾಂಕ: 2.5.2002ರ ಆದೇಶದಲ್ಲಿ ದಿನಾಂಕ: 19.2.2002 ರಿಂದ 2 ವರ್ಷಗಳ ಅವಧಿಗೆ ಮುಂದುವರೆಸಲಾಗಿದ್ದು, ಪ್ರಸ್ತುತ ಈ ಹುದ್ದೆಗಳ ವಿಸ್ತರಿತ ಅವಧಿಯು ದಿನಾಂಕ: 18.2.2004ಕ್ಕೆ ಮುಕ್ತಾಯಗೊಳ್ಳಲಿದೆ. ಆದರೆ, ಸಹ ನಿರ್ದೇಶಕರು ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಯೋಜನಾ ಮೇಲ್ವಿಚಾರಣಾ ಘಟಕ, ಆರ್ಥಿಕ ಇಲಾಖೆ ಇವರು ಕ್ರಮ ಸಂಖ್ಯೆ (9) ರಲ್ಲಿ ಓದಲಾದ ದಿನಾಂಕ: 16.12.2003ರ ಅನಧಿಕೃತ ಟಿಪ್ಪಣಿಯಲ್ಲಿ ಈ ಹುದ್ದೆಗಳನ್ನು ದಿನಾಂಕ: 19.2.2004 ರಿಂದ ಮತ್ತೆ 2 ವರ್ಷಗಳ ಅವಧಿಗೆ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಪ್ರಸ್ತಾವನೆಯನ್ನು ಇಲಾಖಾ ಕಾರ್ಯದರ್ಶಿಗಳ ಅನುಮೋದನೆಯೊಂದಿಗೆ ಕಳುಹಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 1 ಸಸಿವಿ 2004, ಬೆಂಗಳೂರು, ದಿನಾಂಕ: 20ನೇ ಜನವರಿ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿನ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 19.2.2004 ರಿಂದ ಮತ್ತೆ 2 ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿದೆ.

| | | |
|---|---|---|
| 1. | ಅ. ಜಂಟಿ : ಉಪ ಕಾರ್ಯದರ್ಶಿ<br>ಆ. ಶೀಘ್ರಲಿಪಿಗಾರರು<br>ಇ. ಕಿರಿಯ ಸಹಾಯಕರು | 1<br>1<br>1 |
| 2. | ಅಕೌಂಟ್ಸ್ ಆಫೀಸರ್ (ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯಪತ್ರ ಇಲಾಖೆಯಿಂದ ನಿಯೋಜಿಸುವುದು) | 1 (ವೇತನ ಶ್ರೇಣಿ ರಹಿತ ಹುದ್ದೆ) |
| 3. | ಸಹಾಯಕ ನಿರ್ದೇಶಕರು : ಉಪ ನಿರ್ದೇಶಕರು | 1 (ವೇತನ ಶ್ರೇಣಿ ರಹಿತ ಹುದ್ದೆ) |

| | | |
|---|---|---|
| 4. | ಪ್ರೋಗ್ರಾಮರ್ | 1 |
| 5. | ಶೀಘ್ರಲಿಪಿಗಾರರು : ಡಾಟಾ ಎಂಟ್ರಿ ಆಪರೇಟರ್ | 1 |
| 6. | ಸಂಶೋದನಾಧಿಕಾರಿ ಮತ್ತು ಪದನಿಮಿತ್ತ ಅಪರ ನಿರ್ದೇಶಕರು : ಸಹ ನಿರ್ದೇಶಕರು : ಉಪ ನಿರ್ದೇಶಕರು, ಯೋಜನಾ ಮೇಲ್ವಿಚಾರಣಾ ಘಟಕ | 2 (ವೇತನ ಶ್ರೇಣಿ ರಹಿತ ಹುದ್ದೆ) |
| 7. | ಶಾಖಾಧಿಕಾರಿ | 1 |
| 8. | ಹಿರಿಯ ಸಹಾಯಕರು | 1 |
| 9. | ಶೀಘ್ರಲಿಪಿಗಾರರು | 1 |
| 10. | ಬೆರಳಚ್ಚುಗಾರರು | 1 |
| 11. | ಟೆಕ್ನೀಷಿಯನ್ (ಗ್ರೂ ^ಡಿ^ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ). | 1 |
| 12. | ವಾಹನ ಚಾಲಕ | 1 |
| 13. | ಡಾಟಾ ಎಂಟ್ರಿ ಆಪರೇಟರ್ | 1 |
| 14. | ಹಿರಿಯ ಸಹಾಯಕ | 1 |
| 15. | ಸಹಾಯಕ | 1 |
| 16. | ಕಿರಿಯ ಸಹಾಯಕ | 1 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆಃ ಆಇ 1 ಟಿಎಫ್‌ಪಿ 96, ದಿನಾಂಕಃ 10.7.1996 ರಲ್ಲಿ ನೀಡಿರುವ ಸಹಮತಿ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ.ಪ್ರಭು**

ಪಿ.ಆರ್. 99 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2)

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಶ್ರೀ ಪ್ರಕಾಶ್, ಪದವೀಧರ ಇಂಜಿನಿಯರ್ (ಎಂ.ಆರ್‌ಇ) ಇವರು ದಿನಾಂಕ 1.5.2002ಕ್ಕೆ ದಿನಗೂಲಿ ನೌಕರರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ 357 ಪಿಡಬ್ಲ್ಯುಸಿ 90 ದಿನಾಂಕಃ 2.12.94
3. ಸರ್ಕಾರದ ಪತ್ರ ಸಂಖ್ಯೆ:ಪಿಡಬ್ಲ್ಯುಡಿ 201 ಪಿಡಬ್ಲ್ಯುಸಿ 95, ದಿನಾಂಕಃ 2.7.94, 1.9.95 ಮತ್ತು 13.9.95.
4. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ 45 ಪಿಡಬ್ಲ್ಯುಸಿ 97 ದಿನಾಂಕ: 20.8.97.
5. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ಉ) ಧಾರವಾಡ, ಇವರ ಪತ್ರ ಸಂಖ್ಯೆ: ಸಿಬಿಎನ್:ಸಿ 10:ದಿನಗೂಲಿ;29:03-04:4591:ದಿನಾಂಕ; 5.9.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ 29.9.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ 29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7 ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (4) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ಉ) ಧಾರವಾಡ ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು.ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ 29.9.94 ಹಾಗೂ ಪಿಡಬ್ಲ್ಯುಡಿ 45 ಪಿಡಬ್ಲ್ಯುಸಿ 97 ದಿನಾಂಕ 20.8.97ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಸಹಾಯಕ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 48 ಪಿಡಬ್ಲ್ಯುಸಿ 2003, ಬೆಂಗಳೂರು ದಿನಾಂಕ: 19ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94 ಹಾಗೂ ಪಿಡಬ್ಲ್ಯುಡಿ 45 ಪಿಡಬ್ಲ್ಯುಸಿ 97 ದಿನಾಂಕ 20.8.97ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ದಿನಗೂಲಿಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧ ಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| 1. | ಶ್ರೀ ಪ್ರಕಾಶ, ಪದವೀಧರ ಇಂಜಿನಿಯರ್ | 1.5.92 | 30.4.2002 | 1.5.2002 | ಲೋಇ ಉಪ ವಿಭಾಗ, ಸುರಪುರ. |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ಉ) ಧಾರವಾಡ ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ಉ)ಧಾರವಾಡ ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ 29.9.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಚಂದ್ರಶೇಖರಪ್ಪ**

ಪಿ.ಆರ್. 111

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಹೊಸ ಯೋಜನೆಯಾದ ಕೃಷಿ ಕ್ಷೇತ್ರ ಆದಾಯ ವಿಮೆ ಯೋಜನೆಯನ್ನು (Farm Income Insurance Programme) ಪ್ರಾಯೋಗಿಕವಾಗಿ ಭತ್ತದ ಬೆಳೆಯ ಮೇಲೆ ರಾಜ್ಯದ ಮೈಸೂರು ಜಿಲ್ಲೆಯಲ್ಲಿ 2004ರ ಬೇಸಿಗೆ ಹಂಗಾಮಿನಲ್ಲಿ ಅಳವಡಿಸುವ ಬಗ್ಗೆ - ಆದೇಶಗಳು.

**ಓದಲಾಗಿದೆ:**
1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:13011/05/2003 ; ದಿನಾಂಕ:6-12-2003.
2) ಸರ್ಕಾರದ ಆದೇಶದ ಸಂಖ್ಯೆ:AHD/155/AMS(P)/2000; ದಿನಾಂಕ:11-5-2000.
3) ಸರ್ಕಾರದ ಆದೇಶದ ಸಂಖ್ಯೆ:ಕೃತೋಇ/555/ಕೃಉಇ/2003; ದಿನಾಂಕ:10-10-2003
4) ರಾಜ್ಯಮಟ್ಟದ ಬೆಳೆ ವಿಮಾ ಸಮನ್ವಯ ಸಮಿತಿ ಸಭೆ ದಿನಾಂಕ:29-12-2003ರ ನಡವಳಿಗಳು.
5) ಕೃಷಿ ಆಯುಕ್ತರ ಪತ್ರ ಸಂಖ್ಯೆ:ಬೆವಿಫ/ತಾಂ-1/ರಾಕೃಬಿಯೋ-ಸಭೆ/2003; ದಿನಾಂಕ:21-01-2004.

**ಪ್ರಸ್ತಾವನೆ:**

ಮೇಲೆ ಓದಲಾದ ಕೇಂದ್ರ ಸರ್ಕಾರದ ಪತ್ರದಲ್ಲಿ ಕೇಂದ್ರ ಸರ್ಕಾರವು ರಾಷ್ಟ್ರದಲ್ಲಿ ಹೊಸ ಯೋಜನೆಯಾದ ಕೃಷಿ ಕ್ಷೇತ್ರ ಆದಾಯ ವಿಮೆ ಯೋಜನೆಯನ್ನು ಅನುಷ್ಠಾನಗೊಳಿಸಲು ಉದ್ದೇಶಿಸಿದ್ದು, ಇದನ್ನು ಪ್ರಾಯೋಗಿಕವಾಗಿ ಭತ್ತದ ಬೆಳೆಯ ಮೇಲೆ ರಾಜ್ಯದ ಮೈಸೂರು ಜಿಲ್ಲೆಯಲ್ಲಿ 2003-04ರ ಹಿಂಗಾರು / ಬೇಸಿಗೆ ಹಂಗಾಮಿನಲ್ಲಿ ಅಳವಡಿಸಲು ಆಡಳಿತಾತ್ಮಕ ಸೂಚನೆಯನ್ನು ನೀಡಿರುತ್ತದೆ. ಈ ಯೋಜನೆಯಡಿಯಲ್ಲಿ ವಿವಿಧ ಬೆಳೆಗಳ ಉತ್ಪಾದಕತೆಯಲ್ಲದೆ, ಮಾರುಕಟ್ಟೆಯಲ್ಲಿ ಏರುಪೇರಾಗುವ ಬೆಲೆಗಳನ್ನು ಸಹ ಪರಿಗಣಿಸಿ ರೈತರಿಗೆ ವಿಮಾ ಪರಿಹಾರ ನೀಡಲಾಗುವುದು. ಇದರ ಬಗ್ಗೆ ಕೇಂದ್ರ ಸರ್ಕಾರವು ವಿವರವಾದ ಮಾರ್ಗಸೂಚಿಯನ್ನು ನೀಡಿರುತ್ತದೆ.

ಈ ಯೋಜನೆಯನ್ನು ಕರ್ನಾಟಕ ರಾಜ್ಯದಲ್ಲಿ ಅಳವಡಿಸಲು ದಿನಾಂಕ:29-12-2003ರಂದು ರಾಜ್ಯಮಟ್ಟದ ಬೆಳೆ ವಿಮಾ ಸಮನ್ವಯ ಸಮಿತಿ ಸಭೆಯಲ್ಲಿ ನಿರ್ಣಯ ತೆಗೆದುಕೊಳ್ಳಲಾಯಿತು. ಈ ಜಿಲ್ಲೆಯಲ್ಲಿ 2004ರ ಬೇಸಿಗೆ ಹಂಗಾಮಿನಲ್ಲಿ ಭತ್ತದ ಬೆಳೆಯನ್ನು ಹೋಬಳಿ ಮಟ್ಟಕ್ಕೆ ಅಳವಡಿಸಲು ಹಾಗೂ ಪ್ರಾಯೋಗಿಕ ಹಂತದಲ್ಲಿ, ಜಿಲ್ಲಾ ಹಂತದಲ್ಲಿ ವಿಮಾ ಗಣನೆ ದರಗಳನ್ನು ಪರಿಗಣಿಸಿ ಅಧಿಸೂಚಿಸಲು ತೀರ್ಮಾನ ತೆಗೆದುಕೊಳ್ಳಲಾಯಿತು. ಓದಲಾದ ಸರ್ಕಾರಿ ಆದೇಶ (3)ರಲ್ಲಿ ಅನುಬಂಧ - 1ರಲ್ಲಿ ರಚಿಸಲಾದ ರಾಜ್ಯಮಟ್ಟದ ಬೆಳೆ ವಿಮಾ ಸಮನ್ವಯ ಸಮಿತಿ, ರಾಜ್ಯಮಟ್ಟದ ಬೆಳೆ ವಿಮಾ ಸಲಹಾ ಸಮಿತಿ ಹಾಗೂ ಜಿಲ್ಲಾಮಟ್ಟದ ಬೆಳೆ ವಿಮಾ ಉಸ್ತುವಾರಿ ಸಮಿತಿಗಳಲ್ಲಿ ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಳಿಯ ಪ್ರತಿನಿಧಿಗಳನ್ನು ಸಹ ಸೇರ್ಪಡಿಸಿ ಅಧಿಸೂಚಿಸಲು ತೀರ್ಮಾನಿಸಲಾಯಿತು.

ಈ ಬಗ್ಗೆ ಕೃಷಿ ಆಯುಕ್ತರು ಮೈಸೂರು ಜಿಲ್ಲೆಯಲ್ಲಿ 16 ಹೋಬಳಿಗಳನ್ನು 2004ರ ಬೇಸಿಗೆ ಹಂಗಾಮಿನಲ್ಲಿ ಅಧಿಸೂಚಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ರಾಜ್ಯಮಟ್ಟದ ಬೆಳೆ ವಿಮಾ ಸಮನ್ವಯ ಸಮಿತಿಯಲ್ಲಿ ಮತ್ತು ರಾಜ್ಯಮಟ್ಟದ ಬೆಳೆ ವಿಮಾ ಸಲಹಾ ಸಮಿತಿಯಲ್ಲಿ ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಳಿಯ ವತಿಯಿಂದ ವ್ಯವಸ್ಥಾಪಕ ನಿರ್ದೇಶಕರನ್ನು ಹಾಗೂ ಜಿಲ್ಲಾಮಟ್ಟದ ಬೆಳೆ ವಿಮಾ ಉಸ್ತುವಾರಿ ಸಮಿತಿಯಲ್ಲಿ ಜನರಲ್ ಮ್ಯಾನೇಜರ್, ಮೈಸೂರು ವಿಭಾಗ, ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಳಿ, ಮೈಸೂರು ಇವರನ್ನು ಸೇರ್ಪಡಿಸಿ ಅಧಿಸೂಚಿಸಲು ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶವನ್ನು ನೀಡಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕೃತೋಇ/603/ಕೃಉಇ/2003 ; ಬೆಂಗಳೂರು, ದಿನಾಂಕ: 22ನೇ ಜನವರಿ 2004.**

1) ಕರ್ನಾಟಕ ರಾಜ್ಯದಲ್ಲಿ 2004ರ ಬೇಸಿಗೆ ಹಂಗಾಮಿನಲ್ಲಿ ಮೈಸೂರು ಜಿಲ್ಲೆಯಲ್ಲಿ ಭತ್ತದ ಬೆಳೆಯ ಮೇಲೆ ಕೃಷಿ ಕ್ಷೇತ್ರ ಆದಾಯ ವಿಮಾ ಯೋಜನೆಯನ್ನು (Farm Income Insurance Programme) ಪ್ರಾಯೋಗಿಕವಾಗಿ ಈ ಆದೇಶದ ಅನುಬಂಧ -1ರಲ್ಲಿ ನೀಡಿರುವ ಮಾರ್ಗಸೂಚಿಯನ್ವಯ ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿದೆ.

2) 2004ರ ಬೇಸಿಗೆ ಹಂಗಾಮಿನಲ್ಲಿ ಕೃಷಿ ಕ್ಷೇತ್ರ ಆದಾಯ ವಿಮಾ ಯೋಜನೆಯನ್ನು ಭತ್ತದ ಬೆಳೆಯ ಮೇಲೆ ಪ್ರಾಯೋಗಿಕವಾಗಿ ಮೈಸೂರು ಜಿಲ್ಲೆಯ 16 ಹೋಬಳಿಗಳಲ್ಲಿ ಅಳವಡಿಸಿ ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿದೆ. ಯೋಜನೆಯಲ್ಲಿ ಅಳವಡಿಸಿರುವ ಹೋಬಳಿಗಳ ಮತ್ತು ಹೋಬಳಿವಾರು ಖಾತರಿಪಡಿಸಿದ ಆದಾಯ (Guaranteed Income) ವಿವರಗಳನ್ನು ಅನುಬಂಧ - 2ರಲ್ಲಿ ನೀಡಲಾಗಿದೆ.

3) ಈ ಯೋಜನೆಯಡಿಯಲ್ಲಿ ಪಾಲ್ಗೊಳ್ಳುವ ರೈತರು ಭತ್ತದ ಬೆಳೆಗೆ ಕಟ್ಟಬೇಕಾಗಿರುವ ವಿಮಾ ಕಂತು ಅನುಬಂಧ-2ರಲ್ಲಿ ನೀಡಲಾಗಿರುವ ಖಾತರಿಪಡಿಸಿದ ಆದಾಯಕ್ಕೆ ಶೇ.8.80ರಷ್ಟು ಆಗಿರುತ್ತದೆ. ಪಾವತಿಸಬೇಕಾದ ವಿಮಾ ಕಂತಿನ ಮೇಲೆ ಸಣ್ಣ ಮತ್ತು ಅತಿಸಣ್ಣ ರೈತರಿಗೆ ಶೇ.75ರಷ್ಟು ಸಹಾಯಧನ ಹಾಗೂ ಇತರೆ ರೈತರಿಗೆ ಶೇ.50ರಷ್ಟು ಸಹಾಯಧನ ನೀಡಲಾಗುವುದು. ಸಹಾಯಧನ ನೀಡಿದ ನಂತರ ಖಾತರಿಪಡಿಸಿದ ಆದಾಯಕ್ಕೆ ಪಾವತಿಸಬೇಕಾದ ವಿಮಾ ಕಂತು ಕೆಳಕಂಡಂತಿದೆ ;

ಸಣ್ಣ ಮತ್ತು ಅತಿಸಣ್ಣ ರೈತರಿಗೆ - ಶೇ.2.2
ಇತರೆ ರೈತರಿಗೆ - ಶೇ.4.4

4) ಬೆಳೆ ಸಾಲ ಪಡೆಯುವ ರೈತರಿಗೆ ಹಾಗೂ ಬೆಳೆ ಸಾಲ ಪಡೆಯದ ರೈತರಿಗೆ ವಿಮಾ ಕಂತು ಪಾವತಿಸಿ ಕೃಷಿ ಕ್ಷೇತ್ರ ಆದಾಯ ವಿಮಾ ಯೋಜನೆಯಲ್ಲಿ ಪಾಲ್ಗೊಳ್ಳಲು ಕೊನೆಯ ದಿನಾಂಕ:31-03-2004 ಆಗಿರುತ್ತದೆ.

5) ರೈತರು ವಿಮಾ ಕಂತು ಕಟ್ಟಿ ಅರ್ಜಿಯೊಂದಿಗೆ ಯೋಜನೆಯಲ್ಲಿ ಪಾಲ್ಗೊಳ್ಳುವಾಗ ಬೆಳೆಯು ಬಿತ್ತಿದ / ನಾಟಿ ಮಾಡಿದ ನಂತರ 30 ದಿವಸಗಳೊಳಗೆ ಇರಬೇಕು ಹಾಗೂ ಬೆಳೆಯು ಆರೋಗ್ಯಕರವಾಗಿರಬೇಕು.

6) ಸಂಗ್ರಹಿಸಲಾದ ವಿಮಾ ಕಂತಿನೊಂದಿಗೆ ಕ್ರೋಢೀಕೃತ ಪ್ರಸ್ತಾವನೆಗಳನ್ನು ಭಾರತೀಯ ಕೃಷಿ ವಿಮಾ ಕಂಪನಿ ನಿಯಮಿತ ಇವರಿಗೆ ಬ್ಯಾಂಕುಗಳು ಸಲ್ಲಿಸಲು ಕೊನೆಯ ದಿನಾಂಕ:31-04-2004 ಆಗಿರುತ್ತದೆ.

7) ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ ಇವರು ಬೆಳೆ ಕಟಾವು ಪ್ರಯೋಗಗಳನ್ನು ನಡೆಸಲು ಸೂಕ್ತ ವ್ಯವಸ್ಥೆ ಮಾಡತಕ್ಕದ್ದು, ಹಾಗೂ ಸದರಿ ಬೆಳೆ ಕಟಾವು ಪ್ರಯೋಗಗಳ ಇಳುವರಿ ಮಾಹಿತಿಯ ವರದಿಯನ್ನು ಭಾರತೀಯ ಕೃಷಿ ವಿಮಾ ಕಂಪನಿ ನಿಯಮಿತ ಇವರಿಗೆ ದಿನಾಂಕ:31-07-2004ರೊಳಗೆ ನೀಡತಕ್ಕದ್ದು.

8) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯು ಸರಕು ಮೊದಲದಿನ ಬಂದ ದಿನಾಂಕದಿಂದ ಪ್ರತಿನಿತ್ಯದ ಮಾದರಿ ಬೆಲೆಯನ್ನು (Daily Modal Prices) ದಾಖಲಿಸಿ, ಪ್ರತಿವಾರ, 8 ವಾರದ ವರೆವಿಗೆ ಪ್ರತಿನಿತ್ಯದ ಮಾದರಿ ಬೆಲೆಯನ್ನು ಮಾರಾಟವಾದ ಸರಕಿನ ಪ್ರಮಾಣದೊಂದಿಗೆ ಭಾರತೀಯ ಕೃಷಿ ವಿಮಾ ಕಂಪನಿ ನಿಯಮಿತ ಇವರಿಗೆ ಕಳುಹಿಸಿಕೊಡುವುದು.

ಕರ್ನಾಟಕ ರಾಜ್ಯ ಮಾರುಕಟ್ಟೆ ಮಂಡಳಿಯು ಜಿಲ್ಲೆಯಿಂದ ಬಂದಂತಹ ಎಲ್ಲಾ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಮಾರುಕಟ್ಟೆ ಬೆಲೆಯ ಸರಾಸರಿ ಬೆಲೆ (Weighted Average) ಯನ್ನು ಭಾರತೀಯ ಕೃಷಿ ವಿಮಾ ಕಂಪನಿ ನಿಯಮಿತ ಇವರಿಗೆ ನೀಡತಕ್ಕದ್ದು. ಈ ಎಲ್ಲಾ ಕಾರ್ಯಗಳು ಸರಕು ಮೊದಲಬಾರಿಗೆ ಮಾರುಕಟ್ಟೆಗೆ ಬಂದ ದಿನಾಂಕದಿಂದ 10 ವಾರದೊಳಗೆ ಪೂರ್ಣಗೊಳ್ಳಬೇಕಾಗುವುದು.

9) ಓದಲಾದ ಸರ್ಕಾರಿ ಆದೇಶ (2)ರಲ್ಲಿ ಅನುಬಂಧ-3 ಮತ್ತು 4ರಲ್ಲಿ ರಚಿಸಲಾದ ರಾಜ್ಯಮಟ್ಟದ ಬೆಳೆ ವಿಮಾ ಸಮನ್ವಯ ಸಮಿತಿಯಲ್ಲಿ ಮತ್ತು ರಾಜ್ಯಮಟ್ಟದ ಬೆಳೆ ವಿಮಾ ಸಲಹಾ ಸಮಿತಿಯಲ್ಲಿ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಳಿ, ಬೆಂಗಳೂರು ಹಾಗೂ ಅನುಬಂಧ-5ರಲ್ಲಿ ರಚಿಸಲಾದ ಜಿಲ್ಲಾಮಟ್ಟದ ಬೆಳೆ ವಿಮಾ ಉಸ್ತುವಾರಿ ಸಮಿತಿಯಲ್ಲಿ ಜನರಲ್

ಮ್ಯಾನೇಜರ್, ಮೈಸೂರು ವಿಭಾಗ, ಕರ್ನಾಟಕ ರಾಜ್ಯ ಕೃಷಿ ಮಾರುಕಟ್ಟೆ ಮಂಡಳಿ, ಮೈಸೂರು ಇವರನ್ನು ಸದಸ್ಯರನ್ನಾಗಿ ನೇಮಿಸಿ ಸೇರಿಸಲಾಗಿದೆ.

10) ಓದಲಾದ ಸರ್ಕಾರಿ ಆದೇಶದಲ್ಲಿ 2004ರ ಬೇಸಿಗೆ ಹಂಗಾಮಿನಲ್ಲಿ ಮೈಸೂರು ಜಿಲ್ಲೆಯಲ್ಲಿ ಭತ್ತದ ಬೆಳೆಗೆ ರಾಷ್ಟ್ರೀಯ ಕೃಷಿ ವಿಮಾ ಯೋಜನೆಯನ್ನು ಸ್ಥಗಿತಗೊಳಿಸಲಾಗಿದೆ.

11) 2004ರ ಬೇಸಿಗೆ ಹಂಗಾಮಿನಲ್ಲಿ ಮೈಸೂರು ಜಿಲ್ಲೆಯಲ್ಲಿ ಭತ್ತದ ಬೆಳೆಗೆ ಕನಿಷ್ಟ ಬೆಂಬಲ ಬೆಲೆ (Minimum Support Price) ಗೆ ಒದಗಿಸುವ ಸೌಲಭ್ಯವನ್ನು ಸ್ಥಗಿತಗೊಳಿಸಲಾಗಿದೆ.

12) ಕೃಷಿ ಕ್ಷೇತ್ರ ಆದಾಯ ವಿಮಾ ಯೋಜನೆಯನ್ನು ಅನುಷ್ಠಾನಗೊಳಿಸಲು ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಇವರಿಂದ ಮನ್ನಣೆ ಪಡೆದ ವಾಣಿಜ್ಯ ಬ್ಯಾಂಕುಗಳು ಹಾಗೂ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಮತ್ತು ನಬಾರ್ಡ್ ಸಂಸ್ಥೆಯಿಂದ ಮನ್ನಣೆ ಪಡೆದ ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕುಗಳನ್ನು ಆರಿಸಲಾಗಿದೆ.

13) ಜಿಲ್ಲೆಯಲ್ಲಿ ವಿವಿಧ ಮಾಧ್ಯಮಗಳಿಂದ ಹೆಚ್ಚಿನ ಪ್ರಚಾರ ಮಾಡಲು ಹಾಗೂ ಯೋಜನೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಲು ಕ್ರಮ ಜರುಗಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ಅನುಬಂಧ - 1**

**ಸರ್ಕಾರಿ ಆದೇಶ ಸಂಖ್ಯೆ:ಕೃತೋಇ/603/ಕೃಉಇ/2003 ; ಬೆಂಗಳೂರು, ದಿನಾಂಕ: 22-01-2004.**

## ಕೃಷಿ ಕ್ಷೇತ್ರ ಆದಾಯ ವಿಮಾ ಯೋಜನೆ ಮಾರ್ಗಸೂಚಿಗಳು

## Farm Income Insurance Programme Guidelines

**OBJECTIVES**

1. To provide financial support to farmers, in the event of loss in income, from adverse incidence of Crop Yield (on account of natural calamities, pests & diseases) and Market Price fluctuations.
2. To encourage the farmers to adopt prudent and progressive farming practices, both in terms of agricultural technology and market economics.
3. To enhance food and livelihood security of the farming community.
4. To help stablize farm incomes particularly in disaster years.

**PREAMBLE**

The technical terms/legends/phrases defined or expanded herein, are in specific context of the " Farm Income Insurance Scheme [FIIS]". For all other terms & phrases, the common usage shall apply.

**SALIENT FEATURES OF THE SCHEME**

**1. IMPLEMENTING AGENCY [IA]:**

A. AGRICULTURE INSURANCE COMPANY OF INDIA LTD., [AIC] has been created exclusively for the purpose of administering agriculture and allied insurance schemes.

B. AIC has been entrusted by the Government of India to administer the Pilot Project on "FARM INCOME INSURANCE SCHEME" (hereinafter referred to as the "Scheme") & shall therefore be referred to as the "Implementing Agency" [IA].

**2. STATES/UTs FOR IMPLEMENTATION:**

A. The Scheme shall be applicable to selected States/Districts. However, it shall be implemented ONLY in those States, which give their "Consent" thereto.

The "Consent" of the State/UT Govt. shall, inter-alia, embrace the following;

(i) To accept and discharge the Financial Liabilities arising and as stated under the Schemes;

(ii) To provide such support - administrative, technical, statistical, legal and other - as may be required for the purpose of the Scheme and its related / peripheral activities;

(iii) To constitute such Committees and issue such Notifications/Circulars etc., as prescribed herein or may be required later, for the purpose of the Scheme and its related / peripheral activities;

(iv) To generate, maintain and submit such data as required for the purpose of the Scheme and its related / peripheral activities;

(v) To provide necessary authority and support to AIC to discharge its functions / responsibilities under the Scheme, including unhindered access to basic data on Yield Estimation and Market Price.

**3. MANAGEMENT OF THE SCHEME - FORMATION OF COMMITTEES:**

For proper management of the Scheme, the State/UT Govt. shall set up the following Committees:

A. State Level Co-ordination Committee on Crop Insurance [SLCCCI]:

(i) This is the apex Crop Insurance Body at the State/UT level (which is already in existence for "National Agriculture Insurance Scheme [NAIS]".

(ii) The SLCCCI shall be formed (in the new States/UTs) by the State/UT Govt. and headed by the "Agriculture Production Commissioner or Official of similar rank.

(iii) The other members shall include the Commissioner / Secretary and Directors of (a) Agriculture (b) Horticulture (c) Marketing (Mandi Board) (d) Co-operation (e) Economics & Statistics (f) Finance. Registrar of Co-operative Societies. Official of the Ministry of Agriculture, Govt. of India, Senior representatives of the Financial Institutions, esp. RBI, NABARD, Apex Co-operative Banks, Convenor of SLBC, Representative of NSSO and AIC.

(iv) The SLCCCI shall be convened before the commencement of each season and approve the Notification of Crops and corresponding Areas, as well as other essential administrative matters regarding the implementation/operation of the scheme.

(v) At the FIRST SLCCCI Meeting in a State/UT, immediately after the "Consent" to FIIS, some initial decision shall be taken. These shall include:

(a) Selection of Banking network that will service the Non-loaner farmers; [para 11B].

(b) Selection of unit of insurance for "Guaranteed Income" [GI] to be adopted in the State/UT (It is Notified Area-wise for the pilot project; [para 9B].

(c) Whether "Actuarial Premium Rates" [APR} shall be charged at State level or District level; [para 10A].

(d) Steps to be taken to facilitate smooth flow of data / information on Market Prices; [para 9E].

**B. Sub-Committee to SLCCCI:**

(i) To prepare the groundwork for the SLCCCI, this Sub-Committee shall go into all issues in details, including preparation of the draft Notification of Crops and Areas.

(ii) The Sub-Committee shall be formed by SLCCCI and will be headed by the Commissioner/ Director of Agriculture.

(iii) The other members shall include Directors of Economics & Statistics dept, Marketing (Mandi Board) and representative of AIC.

**C. District Level Monitoring Committee (DLMC):**

(i) To monitor the Scheme and to take necessary steps for effective implementation, State Government / UT Admn. shall set up District Level Monitoring Committee (DLMC) at District level.

(ii) The DLMC shall review progress from time to time, involving the Coverage, Yield Estimations and Market Price.

(iii) The DLMC shall be headed by the District Magistrate. The members will be from District Agriculture Officer, Statistics Dept, Marketing Dept, District Co-operative Central Bank, Lead Bank concerned Regional Rural Bank, NABARD and AIC.

**4. NOTIFICATION:**

The implementation of the Scheme shall commence every season, with a Notification from the State Govt./UT Admn. This Notification shall primarily contain:

A. A list of NOTIFIED CROPS (within the broad groups and parameters specified in [para 5] hereunder), which shall be covered under the Scheme in the State/UT.

B. In respect of each Notified Crop, a list of Defined Areas within the State/UT Govt., wherein the coverage would apply (hereinafter to be called NOTIFIED AREAS).

C. While notifying the Crops and Areas, the following are to be observed:

(i) It is NOT necessary that any NOTIFIED CROP should be covered throughout the State/UT. A Crop may be notified (i.e., covered) in those Defined Areas only, where the pre-conditions specified hereunder are fulfilled.

(ii) The pre-conditions for notifying a Defined Area for a particular Crop are;

a) Past Yield data, based on General Crop Estimation Surveys [GCES] for that Crop in that Defined Area, is available with the State/UT Govt. for at least 10 years.

b) There is sufficient acreage under the Crop in the particular Defined Area for planning and conducting the requisite number of Crop Cutting Experiments (CCEs).
c) There is adequate infrastructure to plan and conduct the prescribed(requisite) number of Crop Cutting Experiments (CCE) in each Defined Area which is notified.
d) It is an essential requirement that the Actual Yield Data for each Notified Crop in every Notified Area shall be generated, ONLY on the basis of adequate numbers of Crop Cutting Experiments conducted in accordance with the guidelines prescribed by the 'National Sample Survey Organisation'[NSSO].

D. A "Notified Area" is taken as the "Unit Area of Insurance" and it shall be an administrative unit of area, such as 'Gram Panchayath' 'Mandal', 'Hobli', 'Revenue Circle', 'Phirka', 'Patwari Halka', 'Block', 'Taluka', 'District' etc.,
(i) Subject to fulfillment of the preconditions specified above, it is desirable to notify as small a unit area as possible, so that they are more likely to be homogeneous and the average yield would be more closer to the actual yield of the local farmers.
(ii) The notified area can be different for each crop.
(iii) If under a crop, it is proposed to separately notify irrigated and un-irrigated categories they shall be treated as separate notified crops and the State / UT Govt. shall ensure that all the pre conditions of notifying the Notified crops / Areas are fulfilled.

**5. CROPS TO BE COVERED:**

A) At present, the following crops (and their variants) only shall be covered:
(i) PADDY (RICE)
(ii) WHEAT

B) Irrigated and un-irrigated categories are to be treated as separate crops.

C) Specifically for each State / UT, ONLY those crops shall be covered which are NOTIFIED by the State / UT Govt. for a particular season. In future other crops may also be considered.

**6. RISKS COVERED & EXCLUSIONS:**

A) The Scheme provides " Comprehensive Risk Insurance " against LOSS IN FARM INCOME (Short fall in Actual Income / All over Guaranteed Income (GI)) in a notified area arising out of:
(i) Adverse fluctuations in yield due to occurrence of any one or combination of non preventable natural perils such as Flood, Inundation, Storm, Cyclone, Hailstorm, Landslide, Drought, Dry spells, large-scale outbreak of Pests / Diseases etc; AND,
(ii) Adverse fluctuation of Market Prices (as measured against Minimum Support Price (MSP).

B) Losses arising out of war & nuclear risks, malicious damage and all preventable risks shall be excluded.

**7. SEASONALITY DISCIPLINE:**

A. For the purposes of Scheme administration, there shall broadly be TWO seasons, i.e. KHARIF & RABI.
(i) However, based on local cropping seasons, any other season can be adopted.
(ii) The Seasonality discipline is the same for Loanee and Non-loanee farmers.

B. The broad two-season format has, inter-alia, the following significance:
(i) The mandatory Meeting of the Apex Body of Crop Insurance [SLCCCI] (para 3A) in each State/UT shall be held TWICE in a year compulsorily, before the commencement of each season.
(ii) During adverse seasonal conditions, AIC shall have the right to decline acceptance of risk in mid-season.

C. In conformity with the TWO-season format, viz Kharif and Rabi, the brand Cut-off dates for each phase of activity are framed as under:

| **ACTIVITY** | **PERIOD** |
|---|---|
| **LOANEE FARMERS** | |
| Period qualifying for coverage. | A period, as per guidelines below, to be notified by the SLCCCI. |
| Cut-off date for receipt of Declarations from Banks by AIC. | 30 Days from the end of qualifying period for coverage as notified by the SLCCCI |

